ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ಪಿರಿಯಾ ಪಟ್ಟಣ ತಾಲ್ಲೂಕು ಕೆ.ಎಸ್. ಕಾಳಮರೀ ಗೌಡ ನಗರದಲ್ಲಿ ಶಾಲೆ ನಿರ್ಮಾಣ ಕುರಿತು

ಶ್ರೀ ಎಸ್.ನಾಗರಾಜ್(ಸಂದೇಶನಾಗರಾಜ್) (ಸ್ಥಳೀಯಸಂಸ್ಥೆಗಳಕ್ಷೇತ್ರ)

472 (485) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪಿರಿಯಾಪಟ್ಟಣ ತಾಲ್ಲೂಕು ಕೇಂದ್ರದಿಂದ ಕೇವಲ 8 ಕಿ.ಮೀ ದೂರದಲ್ಲಿರುವ ಕೆ.ಎಸ್. ಕಾಳಮರೀಗೌಡ ನಗರ (ಬುದುತಿಟ್ಟು ಸಮೀಪ) ಸರ್ಕಾರಿ ಪ್ರಾಥಮಿಕ ಶಾಲೆಯು ಅರೆಬರೆ ನಿರ್ಮಾಣಗೊಂಡಿರುವ ಖಾಸಗಿ ಮನೆಯಲ್ಲಿ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಇದಕ್ಕೆ ಪಾವತಿಸುತ್ತಿರುವ ಬಾಡಿಗೆಯನ್ನು ಯಾರು ನೀಡುತ್ತಿದ್ದಾರೆ ; ಇಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರಿಗೆ ಶೌಚಾಲಯ ಹಾಗೂ ಕುಡಿಯುವ ನೀರಿನ ಸೌಲಭ್ಯ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಈ ಶಾಲಾ ಕಟ್ಟಡ ನಿರ್ಮಾಣಕ್ಕೆ 2009 ರಲ್ಲಿ ಅಣ್ಣಾಮಲೆ ಎಂಬುವವರು 3 ಗುಂಟೆ ಜಾಗ ನೀಡಿದ್ದು, 2011 ರಲ್ಲಿ ಸರ್ವಶಿಕ್ಷಣ ಅಭಿಯಾನದ ಅಡಿಯಲ್ಲಿ ಕಟ್ಟಡ ನಿರ್ಮಾಣ ಕಾಮಗಾರಿ ಆರಂಭಗೊಂಡಿದ್ದರೂ, ಇನ್ನೂ ಪೂರ್ಣವಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಐದು ಹುಡುಗರಿಂದ ಆರಂಭವಾದ ಈ ಶಾಲೆಯಲ್ಲಿ 17 ಮಕ್ಕಳ ಓದುತ್ತಿದ್ದು, ಈಗ ಅವರೂ ಬಿಟ್ಟು ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ?